ನವಸಾಕ್ಷರ ಪುಸ್ತಕ ಮಾಲೆ ೧೯

# ಹಳ್ಳಿಯ ಹಾಡುಗಳು

ಡಾ. ಕೆ. ಆರ್. ಸಂಧ್ಯಾರೆಡ್ಡಿ



374
SAN




ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ - ೧೯

# ಹಳ್ಳಿಯ ಹಾಡುಗಳು

ಡಾ. ಕೆ. ಆರ್. ಸಂಧ್ಯಾರೆಡ್ಡಿ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧



015542

**HALLIYA HADUGALU : By Dr. K. R. Sandhya Reddy. Published by The Director, Prasaranga, Kannada University, Hampi - 583 211, KARNATAKA.**
**First Impression 1994, Pp. ii + 26, Rs. 8.00.**

---

© Kannada University 1994

**ಸಂಯೋಜನಾಧಿಕಾರಿ**
ಎಚ್.ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

374
SAN

**ಮುಖಪುಟ ವಿನ್ಯಾಸ**
ಕೆ. ಮಕಾಳಿ

ಬೆಲೆ : ರೂ. ೮.೦೦



**ಮುದ್ರಕರು**
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್
8/1, ಮಾರೇನಹಳ್ಳಿ, 1ನೇ ಕ್ರಾಸ್, 23ನೇ ಮೇನ್,
ಜೆ. ಪಿ. ನಗರ, ಬೆಂಗಳೂರು-560 078.
ಫೋನ್: 642102



# ಹಳ್ಳಿಯ ಹಾಡುಗಳು

ಓದು ಬರಹ ಇಲ್ಲದ ಹಳ್ಳಿಯ ಜನ ಕಟ್ಟಿದ ಹಾಡುಗಳೇ ಹಳ್ಳಿಯ ಹಾಡುಗಳು. ಪ್ರತಿಯೊಂದು ದೇಶದಲ್ಲಿಯೂ ಅವರವರದೇ ಆದ ಹಳ್ಳಿಯ ಹಾಡುಗಳು ಇವೆ. ಇಂಥ ಹಾಡುಗಳು ಎಷ್ಟೋ ತಲೆಮಾರುಗಳಿಂದ ಹರಿದುಬಂದಿವೆ. ಇವುಗಳನ್ನು ಮೊದಲು ಯಾರು ಕಟ್ಟಿದರು ಎಂಬುದು ತಿಳಿಯುವುದಿಲ್ಲ.

## ಹಾಡುಗಾರರು

ಪ್ರತಿಯೊಂದು ಹಳ್ಳಿಯಲ್ಲಿಯೂ ಚೆನ್ನಾಗಿ ಹಾಡುವ ಮತ್ತು ಬಹಳ ಹಾಡುಗಳು ಗೊತ್ತಿರುವ ಕೆಲವು ಮಂದಿ ಇರುತ್ತಾರೆ. ಒಳ್ಳೆಯ ಕಂಠ, ಒಳ್ಳೆಯ ನೆನಪಿನ ಶಕ್ತಿ ಇದ್ದವರು ಪ್ರಸಿದ್ಧಿ ಪಡೆಯುತ್ತಾರೆ. ನೂರಾರು ಹಾಡುಗಳನ್ನು ತಪ್ಪಿಲ್ಲದೆ ಹೇಳುವ ಶಕ್ತಿ ಇಂಥವರಿಗಿದೆ. ಸಮಯಕ್ಕೆ ತಕ್ಕ ಹಾಗೆ ಹಾಡನ್ನು ಕಟ್ಟುವ ಶಕ್ತಿಯೂ ಇವರಿಗಿದೆ. ಇಂಥ ಹಾಡುಗಾರರನ್ನು ವಿಶೇಷ ಸಂದರ್ಭಗಳಲ್ಲಿ ಹಳ್ಳಿಯವರು ಕರೆಸಿ ಹಾಡು ಹೇಳಿಸುತ್ತಾರೆ.

## ಹಳ್ಳಿಯ ಹಾಡಿನ ವಿಧಗಳು

ಹಳ್ಳಿಯ ಹಾಡುಗಳಲ್ಲಿ ಮೂರು ಸಾಲಿನಷ್ಟು ಚಿಕ್ಕದಾದ ಪದ್ಯಗಳೇ ಬಹಳ. ಇವುಗಳಿಗೆ ತ್ರಿಪದಿ ಎಂದು ಹೆಸರು. ಇಂಥ ಅನೇಕ ತ್ರಿಪದಿಗಳು ಸೇರಿ ದೊಡ್ಡ ಹಾಡುಗಳಾಗುತ್ತವೆ.

ಹಳ್ಳಿಯ ಹಾಡುಗಳಲ್ಲಿ ಇಡೀ ರಾತ್ರಿ ಹೇಳಬಹುದಾದಷ್ಟು ದೀರ್ಘವಾದ ಹಾಡುಗಳು, ಹಲವಾರು ರಾತ್ರಿ ಹೇಳಿದರೂ ಮುಗಿಯದಷ್ಟು ದೀರ್ಘವಾದ ಹಾಡುಗಳೂ ಇವೆ.

ಹಾಡು ಹೇಳುವವರು ಮೊದಲು ದೇವಿ ಸರಸ್ವತಿಯನ್ನು ಗಣನಾಯಕನನ್ನೂ ಸ್ತುತಿ ಮಾಡುತ್ತಾರೆ. ನಮಗೆ ಪದಗಳನ್ನು ಕಲಿಸುವ ದೇವತೆಗಳು ಇವರು ಎಂಬುದು ಜನರ ನಂಬಿಕೆ.

ಇವರು ಹೇಳುವ ಸರಸ್ವತಿಯ ಸ್ತುತಿ ಹೀಗಿದೆ :

ನುಗ್ಗಾಲ ಮರದಡಿ ನಿದ್ರೆ ಮಾಡೊದ ಬಿಟ್ಟು
ಎಗ್ಗಿಲ್ದೆ ಬಂದೆ ಸರಸತಿಯೆ ನಿನ ಬಳಿಗೆ
ಚೆಂದುಳ್ಳಿ ಹಾಡ ಕಲಿಸಮ್ಮ

ಗಣನಾಯ್ಕನ ಸ್ತುತಿಯ ಹಾಡು ಒಂದು ಹೀಗಿದೆ :

ಬಾಣಾವರದ ಬಾಗಿಲಲ್ಲಿರುವೋನೆ
ಬಾಲೆಯ ಮಗನೆ ಬೆನವಣ್ಣ, ಬೆಳ್ಳಿದೇವ
ಮೇಲಾದ ಪದಗಳ ಬರಕೊಡೋ.

ಹಳ್ಳಿಯ ಹಾಡುಗಳನ್ನು ಹೆಂಗಸರ ಹಾಡುಗಳು, ಗಂಡಸರ ಹಾಡುಗಳು, ಮಕ್ಕಳ ಹಾಡುಗಳು ಎಂದು ಮೂರು ಗುಂಪು ಮಾಡಿಕೊಳ್ಳಬಹುದು.

## ಹೆಂಗಸರ ಹಾಡುಗಳು

ಹೆಂಗಸರೇ ಕಟ್ಟಿ ಹಾಡುವ ಹಾಡುಗಳು ಬಹಳ ಇವೆ. ಬೀಸುವ ಪದಗಳು, ಕುಟ್ಟುವ ಪದಗಳು, ಹಚ್ಚೆಯ ಪದಗಳು, ಸ್ತುತಿ ಪದಗಳು ಇತ್ಯಾದಿ. ಈ ಹಾಡುಗಳಲ್ಲಿ ಹೆಂಗಸರು ತಮ್ಮ ಬದುಕಿನ ಕಷ್ಟ ಸುಖಗಳನ್ನೂ, ಆಸೆ ಬಯಕೆಗಳನ್ನೂ ಹೇಳಿಕೊಳ್ಳುತ್ತಾರೆ. ಹೆಂಗಸರು ಹಾಡಿದರೆ ಹೇಗಿರುತ್ತದೆ ಎಂಬುದನ್ನು ಒಂದು ಪದದಲ್ಲಿ ಹೀಗೆ ವರ್ಣಿಸಿದ್ದಾರೆ.

ತಾಯಿ ಮಕ್ಕಳ ದನಿಯು ತಾಳ ಬಾರಿಸಿದಾಂಗ
ಜೋಡಿ ಕಿನ್ನೂರಿ ನುಡಿಸಿದಾಂಗ, ಹಲಸಂಗಿ
ಹೊತ್ತೇರಿ ತಾಸೆ ಬಡಿದಾಂಗ

## ಬೀಸುವ ಪದಗಳು



ಹೆಂಗಸರು ಧಾನ್ಯ ಬೀಸುವಾಗ ಹೇಳುವ ಪದಗಳೇ ಬೀಸುವ ಪದಗಳು. ರಾತ್ರಿ ಹೊತ್ತಾದ ಮೇಲೆ ಅಥವಾ ಬೆಳಗಿನ ಜಾವ ಒಂದೇ ಸಮನೆ ಕಾಳು

ಬೀಸುವಾಗ ಬೇಸರವಾಗುತ್ತದೆ. ಹಾಡು ಹೇಳುತ್ತಾ ಕೆಲಸ ಮಾಡಿದರೆ ಶ್ರಮ ತಿಳಿಯುವುದಿಲ್ಲ. ಕೆಲಸ ಬೇಗನೆ ಜರುಗುತ್ತದೆ. ಆದ್ದರಿಂದ ಬೀಸುವಾಗ ಪದಗಳನ್ನು ಹೇಳುವ ರೂಢಿ ಬಂದಿದೆ.

ಸುಮ್ಮನೆ ಬೀಸಿದರೆ ಬೀಳದು ಈ ಕಲ್ಲು
ನಾಗ ಸರದಂತೆ ದನಿ ಎತ್ತಿ ಹಾಡಿದರೆ
ಗಮ್ಮನೆ ಬೀಳುವುದು ಈ ಕಲ್ಲು

- ಎಂಬ ಹಾಡಿನಲ್ಲಿ ಇದೇ ಅರ್ಥವನ್ನು ಹೇಳಿದ್ದಾರೆ. ತವರು ಮನೆಯ ನೆನಪು, ಗಂಡನ ಮನೆಯ ಬಾಳುವೆಯ ಕಷ್ಟ, ಅತ್ತೆಯ ಕಾಟ, ದೇವರ ಸ್ತುತಿ ಹೀಗೆ ಅನೇಕ ವಿಷಯಗಳು ಈ ಹಾಡುಗಳಲ್ಲಿರುತ್ತವೆ.

## ಕುಟ್ಟುವ ಪದಗಳು



ಭತ್ತ ಕುಟ್ಟುವುದೂ ಸಹ ಶ್ರಮದ ಕೆಲಸ. ಈ ಆಯಾಸ ಪರಿಹಾರಕ್ಕಾಗಿ ಭತ್ತ ಕುಟ್ಟುವಾಗ ಪದಗಳನ್ನು ಹೇಳಿಕೊಳ್ಳುತ್ತಾರೆ.

ಅದರಲ್ಲಿ ಬರುವ ಒಂದು ಹಾಡು ಹೀಗಿದೆ :

ಸುವ್ವಾ ಬಾ ಸುವ್ವಿ ಸುವ್ವಾ ಬಾ
ಸುವ್ವಾ ಬಾ ಸುವ್ವಿ ಸುವ್ವಾ ಬಾ
ಅಕ್ಕಂದು ಆಲೂರು ತಂಗೀದು ಬೇಲೂರು
ಸುವ್ವಾ ಬಾ ಸುವ್ವಿ ಸುವ್ವಾ ಬಾ
ಅಕ್ಕಂದು ಆಲೂರು ತಂಗೀದು ಬೇಲೂರು
ಚಿಕ್ಕಕ್ಕನೂರು ಚಿಕಬಿದರೆ

## ಹಚ್ಚೆಯ ಪದಗಳು



ಹೆಂಗಸರು ಮುಂಗೈ, ತೋಳು, ಗಲ್ಲ ಎದೆ, ದೇಹ ಮುಂತಾದವುಗಳಿಗೆ ಹಚ್ಚೆ ಹುಯ್ಸಿಕೊಳ್ಳುತ್ತಾರೆ. ಚುಚ್ಚುವಾಗ ನೋವು ಗೊತ್ತಾಗದಿರಲಿ ಎಂದು ಹಚ್ಚೆಯವರು ಹಚ್ಚೆ ಪದಗಳನ್ನು ಹೇಳುತ್ತಾರೆ.

ಹಚ್ಚೆ ಹೂದೇನು ಬಾರೆ ಬಿತ್ತರಿ ತೋಳಿನ ಮ್ಯಾಲೆ
ನಿನ್ನ ಹಚ್ಚೆಯ ಮೇಲೆ ಗಿಣಿರಾಮಾ
ನಿನ್ನ ಹಚ್ಚೆಯ ಮೇಲೆ ಗಿಣಿರಾಮ್ನ ಬರೆದೇನು
ಚುಚ್ಚಿಸಿಕೊಳ್ಳೋದು ನಿಮಭಾರ

ಹಚ್ಚೆಯ ಹಾಡಿನ ಧಾಟಿಯೇ ಒಂದು ರೀತಿ. ಹಚ್ಚೆಯ ಪದಗಳು ಹೆಚ್ಚು ಸಂಖ್ಯೆಯಲ್ಲಿಲ್ಲ.

## ನಾಟಿ ಪದಗಳು

ನಾಟಿ ಮಾಡುವುದು ಬಹಳ ಹೊತ್ತು ಹಿಡಿಯುವ ಕೆಲಸ. ಹೆಂಗಸರು ಬೇಸರ ಕಳೆದು ಕೊಳ್ಳಲು ನಾಟಿಯ ಪದಗಳನ್ನು ಹೇಳುತ್ತಾರೆ. ಚೆನ್ನಾಗಿ ಹಾಡು ಬರುವಾಕೆ ಪದವನ್ನು ಆರಂಭ ಮಾಡುತ್ತಾಳೆ. ಉಳಿದವರು ಸೊಲ್ಲಿಗೆ ದನಿಗೂಡಿಸುತ್ತಾರೆ.

ಒಂದು ನಾಟಿಪದ ಹೀಗಿದೆ:

ಏ ಗಿಣಿ ಏ ಗಿಣಿಯೇ
ಮುದ್ದು ಹವಳಾದಾ
ಏ ಗಿಣಿ ಏ ಗಿಣಿಯೇ
ಏರಿ ಮ್ಯಾಲ್ ಬರುವ ದೊರೆ ಚೆಂದ ನಂಜುಂಡ
ತೋಳುನ ಮ್ಯಾಲಾಡೊ ಮಗಚೆಂದ
ಕಟಕಟೆ ಚೆಂದಾ ಕಟ್ಟೇಯ ಬಾವ್ ಚಂದ
ಕಟ್ಟೆ ಮ್ಯಾಲ್ ಬರುವ ದೊರೆ ಚೆಂದ
ಕಟ್ಟೆ ಮ್ಯಾಲ್ ಬರುವ ದೊರೆಚಂದ ನಂಜುಂಡ
ಹೊಟ್ಟೆ ಮ್ಯಾಲಾಡೊ ಮಗ ಚಂದ.

### ವ್ರತ ಆಚರಣೆಯ ಹಾಡುಗಳು

ಜೋಕುಮಾರನ ಪೂಜೆ, ಬೆಳ್ದಿಂಗಳಪ್ಪನ ಪೂಜೆ, ಕೊಂತಿಪೂಜೆ, ಗುಳ್ಳವ್ವ, ಮಣ್ಣೆತ್ತಿನ ಅಮವಾಸೆ ಮುಂತಾದ ವ್ರತ, ಪೂಜೆಗಳನ್ನು ಹೆಂಗಸರು ಮಾಡುತ್ತಾರೆ. ಆಯಾ ಪೂಜೆ, ವ್ರತಕ್ಕೆ ಸಂಬಂಧಿಸಿದ ಹಾಡುಗಳನ್ನೂ ಹೇಳುತ್ತಾರೆ. ಬೆಳ್ದಿಂಗಳಪ್ಪನ ಪೂಜೆಯ ಹಾಡು ಹೀಗಿದೆ :

ಕೋಲು ಮಲ್ಲಿಗೆ ಕೋಲೇ । ನಾಗ ಸಂಪಿಗೆ ಕೋಲೆ
ತಿಂಗಳು ತಿಂಗಳಿಗೂ ತಿಂಗಳ ಮಾವನ ಪೂಜೆ
ಗರುಡನ ಪೂಜೆ ಗನಪೂಜೆ ಹಾಗಲವಾಡಿ
ಹನುಮನ ಪೂಜೆ ಶನಿವಾರ

### ಒಸಗೆಯ ಹಾಡುಗಳು

ಇವು ಹೆಣ್ಣು ಮೈ ನೆರೆದಾಗ ಹೇಳುವ ಹಾಡುಗಳು. ಮೈ ನೆರೆದಾಗ ಮಾಡುವ ಸಂಪ್ರದಾಯ ಆಚರಣೆಗಳ ವರ್ಣನೆ ಈ ಹಾಡುಗಳಲ್ಲಿರುತ್ತದೆ.

ಬಾಳೆಯ ಮರದಡಿ ಬಾಲೆ ಮೈ ನೆರೆದಾಳೆ
ಅವರಪ್ಪಾಜಿ ಜೋಯಿಸರ ಕರೆಸಿಕೋಳ್ಯಾನೆ
ಬಾಲೆ ಮೈ ನೆರೆದ ಗಳಿಗೇಯ
ಹರಗಿದ ಹೊಲದಲ್ಲಿ ಮರುಗವ ಕುಯ್ಯೋನೆ
ರಾಯ ನಿನ ತಂಗಿ ಮೈ ನೆರೆದ ಏಸಿಗ್ಗೆ
ಹೋಳಡಿಕೆ ತಿದ್ದೊ ಸಭಿಗೆಲ್ಲ

### ಸೋಬಾನೆಗಳು

ಮದುವೆ ಮುಂತಾದ ಶುಭಕಾರ್ಯಗಳಲ್ಲಿ ಸೋಬಾನೆ ಪದಗಳನ್ನು ಹಾಡುತ್ತಾರೆ. ಮದುವೆಯ ಪ್ರತಿಯೊಂದು ಶಾಸ್ತ್ರಕ್ಕೂ ಬೇರೆ ಬೇರೆ ಸೋಬಾನೆಗಳಿವೆ.

ಸಾಮಾನ್ಯವಾಗಿ ನಾಲ್ಕು-ಐದು ಹೆಂಗಸರು ಒಟ್ಟುಗೂಡಿ ಸೋಬಾನೆಗಳನ್ನು ಹೇಳುತ್ತಾರೆ.

ಒಂದು ಸೋಬಾನದ ಹಾಡು ಹೀಗಿದೆ

ಗಂಧ ಇಕ್ಕರೇ ಗಂಗೀಗೆ ಗೌರಿಗೆ
ಗಂಗಮ್ಮ ಹಡೆದ ಮಗಳೀಗೆ - ಕಂದಮ್ಮನಿಗೆ
ಗಂಧವನಿಕ್ಕಿ ಸುಭವೆನ್ನಿ
ಗಂಧ ಇಕ್ಕೋರು ಚೆನ್ನಾಗಿ ಇಕ್ಕಿರಮ್ಮ
ಚಂದ ಬೆಳ್ಳಿ ಕಡಗ ನಿಮ ಕೈಲಿ - ಹತ್ತು ಬೆಳ್ಳು
ಚಂದಾಗಿ ಬರಲಿ ಮುಡಿಮ್ಯಾಲೆ

ಜರಿಯುವ ಹಾಡುಗಳು ಅಥವಾ ಸನ್ನೆ ಪದಗಳು

ಮದುವೆಯ ಸಂದರ್ಭದಲ್ಲಿ ಜರಿಯುವ ಹಾಡುಗಳನ್ನು ಹೇಳುವುದು ವಿಶೇಷ. ಹೆಣ್ಣಿನವರನ್ನು ಗಂಡಿನವರು ಜರಿಯುತ್ತಾರೆ. ಹಾಗೆಯೇ ಹೆಣ್ಣಿನವರೂ ಗಂಡಿನವರನ್ನು ಜರಿಯುತ್ತಾರೆ. ಹೀಗೆ ಜರಿದರೆ ಇಬ್ಬರೂ ಬೇಸರ ಮಾಡಿಕೊಳ್ಳುವುದಿಲ್ಲ.

ಹೆಣ್ಣಿನವರು ಜರಿಯುವ ಪದ

ಒಂಟಿ ಬರುತ್ತಾವೆಂದು ಎಂಟು ಬಣವಿಕೊಂಡೆ
ಒಂಟೆಲ್ಲಿ ನಿಮ್ಮ ದಳುವೆಲ್ಲಿ ಬೀಗರಿರಾ
ಕುಂಟ್ಹೋರಿ ಮ್ಯಾಲ ಬರಬವುದಾ
ಆನೆ ಬರುತಾವೆಂದು ಅರಮನೆ ಸಾರಿಸಿದೆವು
ಆನೆಲ್ಲಿ ನಿಮ್ಮ ದಳುವೆಲ್ಲಿ - ಬೀಗರಿರಾ
ಆರೇ ಮಂದ್ಯಾಗಿ ಬರಬವುದೆ.

ಗಂಡಿನವರು ಜರಿಯುವ ಪದ

ಜಾಡಿ ಕೊಡುತಾರೆಂದು ಜಾಡಿಸಿ ನಾವು ಬಂದೇವು
ಜಾಡಿಲ್ಲ ಇವರಾ ಮನಿಯಾಗೆ ಲಟಾಪಿಟಿ
ಒಂದಡಕೆ ಒಡದು ಒಂಭತ್ತು ಲಗ್ನಮಾಡಿ
ಇಂದಿನ ಖರ್ಚು ಬಲು ಖರ್ಚು ಎಂದ ಬೀಗ

## ಜೋಗುಳದ ಹಾಡು ಅಥವಾ ಲಾಲಿಪದಗಳು

ಮಕ್ಕಳು ಮಲಗುವಂತೆ ಮಾಡಲು ಎಲ್ಲಾ ತಾಯಂದಿರೂ ಹೇಳುವ ಹಾಡುಗಳು ಲಾಲಿಪದಗಳು. ಇವು ಇಂಪಾದ ಮೆಲುದನಿಯ ಹಾಡುಗಳು.



ಜೋ ಜೋ ಅಥವಾ ಲಾಲಿ ಎಂಬ ಸೊಲ್ಲು ಈ ಹಾಡಿನಲ್ಲಿರುತ್ತದೆ. ಮಕ್ಕಳ ಅಂದ ಚೆಂದ, ಆಟಪಾಠಗಳ ವರ್ಣನೆಯೂ ಇರುತ್ತದೆ.

ಜೋ ಎಂದು ಕೂಗ್ಯಾರೆ ಗೋಪಿಕೃಷ್ಣನ ಜೋ ಜೋ
ದೇವಲೋಕದಿಂದ ದೇವಗನ್ನೇರು ಬಂದೂ
ಜೋಗುಳವ ಪಾಡಿ ತೂಗಿದರೂ ಜೋಜೋ
ಜೋ ಅಂದರೆ ಕೃಷ್ಣಾನಾ ಜೋ ಅಂದರೆ ಬಾಲಾನ
ಜೋಗುಳವ ಪಾಡಿ ತೂಗಿದರು ಜೋ

ಹಾಡುಕಥೆಗಳು

ಹೆಂಗಸರು ಕೆಲವು ಕಥೆಗಳನ್ನು ಹಾಡಿನ ರೂಪದಲ್ಲಿ ಹೇಳುತ್ತಾರೆ. ಇವುಗಳಲ್ಲಿ ನೂರಾರು ಸಾಲುಗಳಿರುತ್ತವೆ. ಒಂದೇ ಹಾಡಿನಲ್ಲಿ ಧಾಟಿಗಳು ರಾಗಗಳು ಬದಲಾಗುತ್ತವೆ. ಇವುಗಳಲ್ಲಿ ಪತಿವ್ರತಾ ಸ್ತ್ರೀಯರ ಕಥೆಗಳು ಹೆಚ್ಚಾಗಿವೆ. ಮಕ್ಕಳಿಲ್ಲದ ಕಾರಣಕ್ಕೆ ಗಂಡನ ಮನೆಯಲ್ಲಿ ಅನಾದರಕ್ಕೊಳಗಾಗಿ ಪಡಬಾರದ ಕಷ್ಟ ಅನುಭವಿಸಿದವರು. ಕೆರೆಗೆ ನೀರು ಬರಲೆಂದು, ಕಟ್ಟಿಸಿದ ಕೋಟೆ ನಿಲ್ಲಲೆಂದು ಆಹುತಿಯಾದವರು ಕೆಲವರು.

ಹಳ್ಳಿಯ ಹಾಡುಗಳಲ್ಲಿ ಗಂಡಸರ ಪದಗಳ ಸಂಖ್ಯೆಯೂ ಬಹಳ ಇದೆ. ದೊಡ್ಡ ದನಿಯಲ್ಲಿ ಉತ್ಸಾಹದಿಂದ ಹಾಡುವುದು ಈ ಪದಗಳ ವಿಶೇಷ. ಬಹಳಷ್ಟು ಪದಗಳನ್ನು ಕುಣಿತದ ಜೊತೆಯಲ್ಲಿ ಅಥವಾ ವಾದ್ಯಗಳ ಹಿಮ್ಮೇಳದ ಜೊತೆಯಲ್ಲಿ ಹಾಡುತ್ತಾರೆ. ಇವು ಹೆಂಗಸರ ಪದಗಳಂತೆ ತಮ್ಮಷ್ಟಕ್ಕೇ ಹಾಡಿಕೊಳ್ಳುವಂಥವಲ್ಲ. ಹಬ್ಬ-ಹರಿದಿನಗಳಲ್ಲಿ, ಜಾತ್ರೆಗಳಲ್ಲಿ ಹತ್ತಾರು ಜನ ಸೇರುವ ಕಡೆ ಇವರ ಹಾಡುಗಾರಿಕೆ ನಡೆಯುತ್ತದೆ.

ಕುಣಿತದ ಪದಗಳು : ಕೋಲಾಟ, ಡೊಳ್ಳು ಕುಣಿತ, ಗುಮ್ಮಟಿ ನೃತ್ಯ, ಸೋಮನ ಕುಣಿತ, ಮಾರಿಕುಣಿತ, ಬೀಸುಕಂಸಾಳೆ, ಪುರವಂತರ ಕುಣಿತ ಮುಂತಾಗಿ ಗಂಡಸರು ಮಾಡುವ ವಿವಿಧ ರೀತಿಯ ಕುಣಿತಗಳಿವೆ. ಕುಣಿತದೊಂದಿಗೆ ಹಾಡನ್ನೂ ಹೇಳುತ್ತಾರೆ.



ಕೋಲಾಟ



ಡೊಳ್ಳು ಕುಣಿತ

ಕೋಲಾಟದ ಪದಗಳು : ಕೋಲಾಟ ಎಂಬುದು ಒಂದು ಗುಂಪು ಕುಣಿತ. ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕೋಲು ಹುಯ್ಯುತ್ತ ಪದಗಳನ್ನೂ ಹೇಳುತ್ತಾರೆ. ಕುಣಿತದ ಗತಿಗೆ ತಕ್ಕಂತೆ ಹಾಡಿನ ಗತಿಯೂ ಬದಲಾಗುತ್ತದೆ. ಕಥೆಗಳನ್ನು ಸಹ ಕೋಲು ಪದಗಳಲ್ಲಿ ಹೇಳುತ್ತಾರೆ. ಕೋಲು ಪದಗಳಲ್ಲಿ ಬಹಳ ವಿಧದ ಧಾಟಿಗಳಿವೆ. ಪ್ರೇಮ, ಭಕ್ತಿ, ಸಂಭಾಷಣೆ, ಪ್ರಕೃತಿ ವರ್ಣನೆ ಮುಂತಾಗಿ ವಿಷಯವೂ ನಾನಾ ಬಗೆಯಾಗಿದೆ. ಕೋಲೂ ಕೋಲನ್ನ ಕೋಲೆ, ತಂದನ್ನೊ ತಾನಾನಾ ತಾನು ತಂದಾನಿ, ತಂದೆ ತಾನಾನಾ ತಂದನ್ನೊ ತಾನ ಎಂಬ ಸೊಲ್ಲುಗಳೂ ಇರುತ್ತವೆ. ಈ ಸೊಲ್ಲುಗಳನ್ನು ಎರಡು ಅಥವಾ ನಾಲ್ಕು ಸಾಲಿನ ನಂತರ ಮತ್ತೆ ಹೇಳುತ್ತಾರೆ.

ಕೋಲಾಟದ ಒಂದು ಪದ ಹೀಗಿದೆ :

ತಾನಾನಾ ತಾನಾನೊ ತಾನು ತಂದೇನಾನೊ
ಜೋಡಿ ಮಲ್ಲಿನೂವ ಜೋತಿ ಮಾಲೆ ಕಟ್ಟಿ
ಜೋಡಡ್ಡೆ ಮೇಲೆ ಬರುವೋಳೆ ತಾನಾನಾ
ಜೋಡಡ್ಡೆ ಮೇಲೆ ಬರುವೋ ದೊಡ್ಡಮ್ಮಗೆ
ಜೋಡಿಸಿ ಕೈಯ ಮುಗದೇವು ತಾನಾನಾ....

ಡೊಳ್ಳುಪದಗಳು : ಬೀರಪ್ಪನ ಭಕ್ತರು ಡೊಳ್ಳು ಬಾರಿಸಿಕೊಂಡು ಕುಣಿಯುತ್ತಾ ಹೇಳುವ ಪದಗಳು. ಒಬ್ಬ ಪದ ಹೇಳಿದರೆ ಇನ್ನು ಮೂವರು ಡೊಳ್ಳು, ಚಾಗಡಿ, ತಾಳ ಬಾರಿಸುತ್ತಾರೆ.

ಡೊಳ್ಳಿನ ಪದಗಳಲ್ಲಿ ದೇವರಸ್ತುತಿ, ಶಿವಶರಣರ ಕಥೆಗಳು, ರಾಮಾಯಣ ಮಹಾಭಾರತದ ಪ್ರಸಂಗಗಳನ್ನೂ ಹೇಳುತ್ತಾರೆ.

ಭಾಗವಂತಿಕೆ ಪದಗಳು - ಭಾಗವಂತಿಕೆ ಪದಗಳನ್ನು ಹಾಡುವವರು ಭಾಗವಂತರು. ಇವರು ನಾರಾಯಣನನ್ನು ಕೊಂಡಾಡುವ ಪದಗಳನ್ನ ಹಾಡುತ್ತಾರೆ.

ದೀವಳಿಗೆಯಲ್ಲಿ ಊರಿಂದೂರಿಗೆ ಪದ ಹಾಡಿಕೊಂಡು ಹೋಗುತ್ತಾರೆ. ಹಾಡುವಾಗ ಕೈಯಲ್ಲಿ ತಾಳ ಹಿಡಿದು, ಪರಸ್ಪರ ಎದುರಾಗಿ ಎರಡು ಸಾಲಿನಲ್ಲಿ ನಿಲ್ಲುತ್ತಾರೆ. ಕೋಡಂಗಿ ವೇಷದವನು ಎರಡು ಸಾಲಿನ ನಡುವೆ ತಾಳದ ಗತ್ತಿಗೆ ಕುಣಿಯುತ್ತಾನೆ. ಭಾಗವಂತಿಕೆಯವರು ರಾಮಾಯಣ, ಮಹಾಭಾರತದ ಕಥೆಗಳನ್ನೂ, ಭಾಗವತದ ಪ್ರಸಂಗಗಳನ್ನೂ ಹಾಡುತ್ತಾರೆ.

015542

**ಅಂಟಿಕೆ ಪಂಟಿಕೆ ಪದಗಳು** - ಇದೂ ಕೂಡ ದೀಪಾವಳಿಯಲ್ಲಿ ನಡೆಯುವ ಹಾಡಿನ ಸಂಪ್ರದಾಯ. ಮಲೆನಾಡಿನಲ್ಲಿ ಈ ಹಾಡುಗಳುನ್ನು ಹಾಡುತ್ತಾರೆ. ಈ ಹಾಡಿನ ತಂಡದವರು ಜ್ಯೋತಿ ಹಿಡಿದುಕೊಂಡು ಮನೆಮನೆಗೂ ಹೋಗಿ ಅಂಟಿಕೆ ಪಂಟಿಕೆ ಪದ ಹಾಡುತ್ತಾರೆ. ಹಾಡುವವರ ಜೊತೆ 'ದೀಪ ದೀಪ ದೀಪೋಳ್ಗೆ' ಎಂದು ಹತ್ತಾರು ಜನ ಕಾಕು ಹಾಕುತ್ತಾರೆ. ಜ್ಯೋತಿಯನ್ನು ಮನೆಯ ಮುಂದಿಟ್ಟು ಪದ ಹೇಳಿ ಮನೆಯವರನ್ನು ಎಬ್ಬಿಸುತ್ತಾರೆ.

ಒಂದು ಅಂಟಿಕೆ ಪಂಟಿಕೆಯ ಪದ ಹೀಗಿದೆ:

ಬಾಗಿಲು ತಗಿರಮ್ಮ ಬಾಗ್ಯದ ಲಕ್ಷಮ್ಮ
ಜ್ಯೋತಿ ಮನ್ಯೊಳಗೆ ಕರಕೊಳ್ಳಿ

ಎಂದು ಹೇಳಿ ದೀಪ ನೆಡುತ್ತಾರೆ. ಅಲ್ಲಿಂದ ಹೊರಡುವಾಗ,

ಹೋಗಿಬರ್ರೀವಿ ಹೊಸ್ತಿಲೆ ಹೋಗಿ ಬರ್‍ತಿವಿ ಬಾಗೀಲೆ
ನಾಗ ಸಂಪಗೆಯ ನಡುಮನೆ ದೇವರ ಕೋಣೆ
ಇಂದೋಗಿ ಮುಂದೆ ಬರುತೀವಿ - ಎಂದು ಹೇಳಿ ಹೊರಡುತ್ತಾರೆ.

**ಹಂತಿಯ ಹಾಡುಗಳು** - ಉತ್ತರ ಕರ್ನಾಟಕದ ಕಡೆ ಸುಗ್ಗಿಯ ಕಾಲದಲ್ಲಿ ಹೇಳುವ ಹಾಡುಗಳು. ಜೋಳದ ತೆನೆಗಳನ್ನು ಎತ್ತುಗಳಿಂದ ತುಳಸಿ ಕಾಳು ಒಕ್ಕುವ ವಿಧಾನಕ್ಕೆ ಹಂತಿ ಎಂದು ಹೆಸರು. ಈ ಪದಗಳಲ್ಲಿ

ಮಹಾಪುರುಷರ, ಪುರಾಣ ವ್ಯಕ್ತಿಗಳ, ದೇವಾನು ದೇವತೆಗಳ ವಿಷಯದ ಬಗ್ಗೆ ಕಥೆಯನ್ನು ಹಾಡುತ್ತಾರೆ. ಹಾಸ್ಯ ಮತ್ತು ಪ್ರಶ್ನೋತ್ತರ ರೂಪದ ಹಾಡೂಗಳೂ ಇವೆ.

ಕಲ್ಗಿ ತುರಾಹಾಡುಗಳು - ಇವಕ್ಕೆ ಸವಾಲ್ ಜವಾಬ್ ಹಾಡುಗಳು, ಹರದೇಶಿ ನಾಗೇಶಿ ಸಂಪ್ರದಾಯ ಎಂತಲೂ ಹೆಸರಿದೆ. ಕಲ್ಗಿ ತುರಾ ಎಂಬುವು ತಲೆಯ ತೊಡುಗೆಗಳು. ಕಲ್ಗಿ ಧರಿಸಿದವರು ಹೆಣ್ಣಿನ ಪಕ್ಷದವರು, ತುರಾದವರು ಗಂಡಿನ ಪಕ್ಷದವರು. ಒಬ್ಬರು ಹಾಕಿದ ಸವಾಲಿಗೆ ಮತ್ತೊಬ್ಬರು ಜವಾಬು ಕೊಡುತ್ತಾರೆ. ಜವಾಬು ಕೊಡದಿದ್ದವರು ಸೋತಂತೆ. ವೇದ, ಪುರಾಣಗಳಿಂದ ತಮ್ಮ ವಾದಕ್ಕೆ ಉದಾಹರಣೆಗಳನ್ನು ಆರಿಸಿಕೊಳ್ಳುತ್ತಾರೆ. ಆದಿಶಕ್ತಿಯೇ ಹೆಚ್ಚೆಂದು ವಾದಿಸುವವರು ಹೇಳುವ ಒಂದು ಹಾಡು ಹೀಗಿದೆ.

ಆದಿ ಕೇಳೊನಾ ಅನಾದಿ ಕೇಳೊನಾ
ಆಚಿ ಕಡೆಯಾನಾ ಸ್ವಯಂ ಜ್ಯೋತಿ ಕೇಳೋನಾ
ಬ್ರಹ್ಮವಿಷ್ಣು ತೆತ್ತೀಸಕೋಟಿ ದೇವರ ಭಗವಾನಾ
ನನ್ನಿಂದ ಜೋಪಾನಾ ಅವರನ್ನ ಎತ್ತಿ ಇಳಿವಿನಾ
ಆಲದ ಎಲಿಯೊನಾ ಅದರ ಮ್ಯಾಲ ಅಲ್ಲಮಪ್ರಭುವಾ
ಆಧಾರ ಅದಕ್ಕಿನಾ ನನ್ನಿಂದ ದೇವರ ಉತ್ಪನ್ನ

ಲಾವಣಿ - ಇವು ವಿಶಿಷ್ಟ ಧಾಟಿಯ ಹಾಡು. ಚರಿತ್ರೆಯಲ್ಲಿ ಆಗಿ ಹೋದ ವೀರರ ಕಥೆಗಳನ್ನು ಲಾವಣಿ ಕಟ್ಟಿ ಹಾಡುತ್ತಾರೆ. ಲಾವಣಿಯನ್ನು ಎತ್ತರದ ದನಿಯಲ್ಲಿ ಹಾಡುತ್ತಾರೆ. ಧಾಟಿಗೆ ತಕ್ಕಂತೆ ಕೈಯಲ್ಲಿ ಚಿಟಗಿ ಹಾಕುತ್ತಾರೆ. ಕೆಲವು ಸಲ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಅಭಿನಯ ಮಾಡುತ್ತಾರೆ. ಬೆಳವಡಿ ಮಲ್ಲಮ್ಮ, ಕಿತ್ತೂರ ಚನ್ನಮ್ಮ, ಸಂಗೊಳ್ಳಿರಾಯಣ್ಣ, ಮಲಸರ್ಜ ದೊರೆ ಮೊದಲಾದ ಲಾವಣಿ ಪದಗಳು ಪ್ರಸಿದ್ಧವಾಗಿವೆ.

ಸಂಗೊಳ್ಳಿರಾಯಣ್ಣ ಲಾವಣಿಯ ಕೆಲವು ಸಾಲುಗಳು ಹೀಗಿವೆ:

ಏ ಸಿಂಹದಂತ ಸಂಗೊಳ್ಳಿರಾಯಾ
ಭೂಮಿಗಿ ಬಿದ್ದಂಗ ಸೂರ್ಯನ ಛಾಯಾ
ನೆತ್ತರ ಕಾವಲಿ ಹರಿಸಿದಾನೊ ಕಿತ್ತೂರ ನಾಡಾಗ
ಭಾಳಾ ಬಂಟಸ್ತಾನ ಪದವಿ ಇತ್ತು ಅವನ ಹೊಟ್ಟೆಯೊಳಗ
ಸೃಷ್ಟಿಯಲ್ಲಿ ಹುಟ್ಟಿ ಬಂದ ಶ್ರೇಷ್ಠನಾಗಿ ಹೋಗಿದಾನ
ದುಷ್ಟ ರಾವಣಾಸುರನ ಲಂಕಾ ಸುಟ್ಟಂಗ
ಹಿಂಗ ಸಂಪಗಾಂವಿ ಬಿಡಿಓ ಕಛೇರಿ ಸುಟ್ಟಾನ ಕಲಿಕಿದೊಳಗ

ದೇವರ ಗುಡ್ಡರು - ಇವರ ಆರಾಧ್ಯದೈವ ಮಲೆಯ ಮಾದೇಶ್ವರ. ಮಲೆಯ ಮಾದೇಶ್ವರನ ಕಾವ್ಯ ತುಂಬ ದೊಡ್ಡದು. ಇಡೀ ಕಥೆ ಹೇಳಿ ಮುಗಿಸಲು ಏಳೆಂಟು ರಾತ್ರಿಗಳಾದರೂ ಬೇಕು.

ಮಾದೇಶ್ವರನ ಕಾವ್ಯ ಹಾಡುವವರು ಕಂಸಾಲೆ ಎಂಬ ಕಂಚಿನ ವಾದ್ಯವನ್ನು ನುಡಿಸಿಕೊಂಡು ಹಾಡುತ್ತಾರೆ.

ಇದೇ ರೀತಿ ನೀಲಗಾರರು ಮಂಟೇಸ್ವಾಮಿಯ ಕಥೆ ಹಾಡುತ್ತಾರೆ. ಚೌಡಿಕೆಯವರು ಚೌಡಿಕೆ ಎಂಬ ವಾದ್ಯ ಬಾರಿಸಿಕೊಂಡು ಎಲ್ಲಮ್ಮ ದೇವಿಯನ್ನು ಕೊಂಡಾಡುವ ಚೌಡಿಕೆ ಪದಗಳನ್ನು ಹಾಡುತ್ತಾರೆ. ಕಾಡುಗೊಲ್ಲರೆಂಬ ಜನಾಂಗದವರು ಜುಂಜಪ್ಪನ ಕಥೆಯನ್ನು ಹಾಡುತ್ತಾರೆ. ಜುಂಜಪ್ಪ ಅವರ ಆರಾಧ್ಯದೈವ.

ಗೊರವರು ಮೈಲಾರಲಿಂಗನ- ಕತೆಯನ್ನು ಹಾಡುತ್ತಾರೆ. - ಆರಾಧ್ಯ ದೇವರುಗಳ ಕಥೆಯನ್ನಲ್ಲದೆ ಬೇರೆ ಬೇರೆ ರೀತಿಯ ಕಥೆಗಳನ್ನು ಹಾಡಿ ಜನರ ಮನರಂಜನೆ ಮಾಡುವವರೂ ಇದ್ದಾರೆ. ದೊಂಬಿ ದಾಸರೆಂಬ ತಂಡದವರು

ಗಂಗೆ ಗೌರಿ ಜಗಳ, ಕೃಷ್ಣ ಕೊರವಂಜಿ, ಕಲಿಯುಗದ ಬಾಲೆ, ಅತ್ತೆಸೊಸೆ, ಕೊಣವೇ ಗೌಡ, ಬಾಲನಾಗಮ್ಮ ಮುಂತಾದ ಕಥೆಗಳನ್ನು ಏಕತಾರಿ ನುಡಿಸಿಕೊಂಡು ಹಾಡುತ್ತಾರೆ.

ಹೆಳವರು - ಎಂಬುವವರು ಒಕ್ಕಲು ಮಕ್ಕಳ ಕುಲ ಗೋತ್ರಗಳನ್ನು ವಂಶಾವಳಿಯನ್ನೂ ಹೊಗಳಿ ಹಾಡುತ್ತಾರೆ. ಚಾಮುಂಡಿ ಪುರಾಣ, ಮಾಗಡಿ ಕೆಂಪೇಗೌಡನ ಲಾವಣಿ ಮೊದಲಾದ ಕಥೆಗಳನ್ನೂ ಹಾಡುತ್ತಾರೆ.

ಕಿನ್ನರಿಜೋಗಿಗಳು - 'ಕಿನ್ನರಿ' ಎಂಬ ವಾದ್ಯ ನುಡಿಸುತ್ತಾರೆ. ಜೋಗಿ ಹಾಡು, ಮಹಾಭಾರತದ ಭಾಗಗಳನ್ನು ಹಾಡುತ್ತಾರೆ. ಕರಪಾಲದವರು ಮಾಡುವ ಮೇಳಗಳಲ್ಲಿ ಸ್ವಲ್ಪ ಅಭಿನಯವೂ ಇರುತ್ತದೆ.

ಮಕ್ಕಳ ಹಾಡುಗಳು - ಮಕ್ಕಳ ಹಾಡುಗಳಲ್ಲಿ ಹೆಣ್ಣುಮಕ್ಕಳ ಹಾಡುಗಳೇ ಬೇರೆ, ಗಂಡುಮಕ್ಕಳ ಹಾಡುಗಳೇ ಬೇರೆ. ಸಾಮಾನ್ಯವಾಗಿ ಮಕ್ಕಳ ಹಾಡುಗಳು ಆಟಕ್ಕೆ ಸಂಬಂಧಿಸಿರುತ್ತದೆ. ಇವು ಇಂಪಾದ ಹಾಡುಗಳು ಹುಡುಗಿಯರು ಕೋಲಾಟದ ಜೊತೆಗೆ ಹೇಳುವ ಅರಳೆಲೆ ಬಸವನಹಾಡು ಹೀಗಿದೆ :

ಎಲೆಯಾ ಎಲೆಯಾ ಎಲೆಕೆಂಜಡೆಯಾ
ಎಲೆಬಳ್ಳಿ ಮೇಲೆ ನಾಗಸಂಪಗೆಯಾ
ನಾಗಸಂಪಗೆಯಾ ನಂದನ ಬನವೋ
ನಂದನ ಬನದೊಳಗೆ ನಿಂದಿರುವರ್‍ಯಾರೆ
ನಿಂದಿರುವರ್‍ಯಾರೆ ತಂದೆ ಬಸವಯ್ಯ
ತಂದೆ ಬಸವಯ್ಯನ ಮಗನು ಕೆಂಪಯ್ಯ

ಗುರ್ಚಿಪೂಜೆ - ಇದು ಗಂಡುಮಕ್ಕಳು ಮಳೆಗಾಗಿ ಮಾಡುವ ಆಚರಣೆ. ಗುರ್ಚಿಯನ್ನು ಮಣ್ಣಿನಲ್ಲಿ ಮಾಡಿ ಹಲಗೆಯ ಮೇಲಿಟ್ಟು ಪೂಜೆ ಮಾಡುತ್ತಾರೆ.

ಇದನ್ನು ಒಬ್ಬ ಹುಡುಗನ ತಲೆಯ ಮೇಲೆ ಹೊರಿಸಿಕೊಂಡು ಹುಡುಗರು ಗುಂಪುಗುಂಪಾಗಿ ಮನೆಮನೆಗೂ ಹೋಗುತ್ತಾರೆ. ಅಲ್ಲಿ ಗುರ್ಚಿಯ ಹಾಡನ್ನು ಹಾಡುತ್ತಾರೆ.

ಗುರ್ಚಿ ಗುರ್ಚಿ ಎಲ್ಲಾಡಿ ಬಂದೆ
ಹಳ್ಳ ಕೊಳ್ಳ ತಿರುಗಾಡಿ ಬಂದೆ
ಕಾರಮಳೆಯೇ ಕಪ್ಪತಮಳೆಯೇ
ಸುರಿಮಳೆಯೇ ಸುರಿಮಳೆಯೇ

ಮಾರ್ನವಮಿಯ ಪದಗಳು - ಮಹಾನವಮಿ ದಿನಗಳಲ್ಲಿ ಗಂಡು ಮಕ್ಕಳು ಮಾರ್ನವಮಿ ಪದಗಳನ್ನು ಹಾಡಿಕೊಂಡು ಮನೆ ಮನೆಗೆ ಹೋಗುವ ಸಂಪ್ರದಾಯವಿದೆ. ಬಿಳಿ ಅಂಗಿ, ಬಣ್ಣದ ಚಡ್ಡಿ, ಕೋಟು, ತಲೆಗೆ ಟೋಪಿ ಹಾಕಿದ ಹುಡುಗರು ಪದಗಳನ್ನು ಹೇಳಿ, ತಮಗೆ ದವಸಕೊಟ್ಟವರ ಮನೆಗೆ ಒಳ್ಳೆಯದಾಗಲಿ ಎಂದು ಹಾರೈಸುತ್ತಾರೆ. ಇಂಥ ಒಂದು ಹರಕೆಯ ಪದ ಹೀಗಿದೆ :

ಅಶ್ವಯುಜ ಶುದ್ಧ ಮಾನವಮಿ ಬರಲೆಂದು
ಐಶ್ವರ್ಯ ಸಕಲ ಸಂಪದ ಹೆಚ್ಚಲೆಂದು
ಈಶ್ವರನ ಕೃಪೆ ನಿಮಗೆ ಸುಬವಾಗಲೆಂದು
ಶಾಶ್ವತದಿ ಹರಸಿದೆವು ಬಾಲಕರು ಬಂದು

ಒಟ್ಟಿನಲ್ಲಿ ಹಳ್ಳಿಯ ಹಾಡುಗಳು ನಾನಾ ವಿಧವಾಗಿವೆ. ಒಂದೊಂದು ಪ್ರದೇಶದಲ್ಲಿ ಒಂದೊಂದು ಬಗೆಯ ಹಾಡುಗಳಿವೆ. ಈ ಎಲ್ಲಾ ಹಾಡುಗಳ ಸಂಖ್ಯೆಯನ್ನು ಎಣಿಸುವುದಕ್ಕೆ ಸಾಧ್ಯವಿಲ್ಲ. ಹಳ್ಳಿಯ ಹಾಡುಗಳು ತಲೆಮಾರಿನಿಂದ ತಲೆಮಾರಿಗೆ ಪೂರ್ವಿಕರಿಂದ ಬಂದ ಬಳುವಳಿ. ಹಿರಿಯರಿಂದ ಬಂದ ಈ ಆಸ್ತಿಯನ್ನು ಗೌರವಿಸುವುದು, ಕಾಪಾಡಿಕೊಳ್ಳುವುದು ಎಲ್ಲರ ಕರ್ತವ್ಯ.

## ಕೆಲವು ಹಳ್ಳಿ ಹಾಡುಗಳ ಸಂಗ್ರಹ

### ಹೆಂಗಸರು ಹೇಳುವ ಬೀಸುವಕಲ್ಲಿನ ಪದಗಳು

ಕುಟ್ಟು ಬೀಸುವ ಹಾಡು ಯಾವಾಕಿ ಕಲಿಸ್ಯಾಳ।
ಕೃಷ್ಣನ ತಂಗಿ ಸುಭದ್ರಿ। ಕಲಿಸ್ಯಾಳ।
ಕೃಷ್ಣನ ಮೂಲ ಪದಗೋಳ॥

ಬೀಸುವ ಕಲ್ಲಿಗೆ ದೇಶವ ತಿರುಗ್ಯಾರೆ
ಸಕಲ ಸಂಪನರ ಮಗಳೀಗೆ। ನೀಲಮಗೆ।
ರಾಜ್ಯ ತಿರುಗ್ಯಾರೆ ಬಸವಯ್ಯ॥

ಅಕ್ಕಿ ಬೀಸುವ ಕಲ್ಲೆ ಸಕ್ಕರೆ ಒಡೆಗಲ್ಲೆ
ಶೆಟ್ಟಿ ತಮ್ಮಯ್ಯ ಅರಮನೆ। ರಾಗಿಕಲ್ಲೆ।
ಹಟ್ಟಿ ಬಾಗಿಲಿಗೆ ದನಿದೋರೆ॥

ಕಲ್ಲಮ್ಮ ಮಾತಾಯಿ ಮೆಲ್ಲಮ್ಮ ರಾಗೀಯ
ಜಲ್ಲಜಲ್ಲಃನೆ ಉದುರಮ್ಮ। ನಾ ನಿನಗೆ
ನೆಲ್ಲಕ್ಕಿ ಪಡಿಯನಡಸೇನು ॥

### ಹೆಂಗಸರು ಹೇಳಿಕೊಳ್ಳುವ ತ್ರಿಪದಿಗಳು

ಅಡಗೀಯ ಮನಿಯಾಗ ಮಡದೀಯ ಸುಳುವಿಲ್ಲ।
ಅಡಗಿ ಬಾಯೀಗಿ ರುಚಿಯಿಲ್ಲ। ಹಡೆದವ್ವ।
ಮಡದಿ ತವರೀಗಿ ಹೋಗ್ಯಾಳ॥

ಹಚ್ಚಡದ ಪದರಾಗ ಅಚ್ಚ ಮಲ್ಲಿಗಿ ಹೂವ।
ಬಿಚ್ಚಿ ನನ ಮ್ಯಾಲ ಒಗೆವಂಥ। ರಾಯರನ।
ಬಿಟ್ಟ್ಯಾಂಗ ಬರಲೆ ಹಡೆದವ್ವ॥

ಗಂಡಹೆಂಡಿರ ಜಗಳಾ ಗಂಧ ತೀಡೀಧಾಂಗ।
ನಿಂಗಕ ನೀರು ಎರೆದಾಂಗ। ಹಿರಿಹೊಳೆಯ।
ಗಂಗವ್ವ ಸಾಗಿ ಹರಿದಂಗ॥

ಎಂದ ಬರತಿರಿ ನನ್ನ ಗಂಧದ ರತಿಗಾರ।
ರುಮ್ಮಾಲ ಎಲ್ಲ ಪರಿಮಳ। ನನ ನಲ್ಲ।
ಎಂದ ಬರತೀರಿ ನನಗ್ಹೇಳ॥

ಹಾಸೀಗಿ ಹಾಸೆಂದಾ ಮಲ್ಲೀಗಿ ಮುಡಿಯೆಂದಾ।
ಬ್ಯಾಸತ್ತರ ಮಡದಿ ಮಲಗೆಂದಾ । ನನರಾಯಾ।
ತನನೋಡಿ ತವರ ಮರಿಯಂದಾ॥

## ಒಸಗೆಯ ಹಾಡುಗಳು

### ಕುಬಸಾ ಮಾಡೂ ಹಾಡು

ಒಂದಂಬು ತಿಂಗಳಿಗಿ ಒಂದೇನ ಬಯಸ್ಯಾಳ।
ಅಂಗೈಯಲುಪ್ಪಾ ಎಳೆಹುಣಸಿ

ಎರಡಂಬು ತಿಂಗಳಿಗಿ ಎರಡೇನು ಬಯಸ್ಯಾಳ।
ಎರಡೆಲಿಗೊಂಡ ಎಳಿಮಾವ

ಮೂರಂಬು ತಿಂಗಳಿಗಿ ಮೂರೆನೋ ಬಯಸ್ಯಾಳ ।
ಮೂಡ್ಯಲ ದಿಕ್ಕಿನ ಮಗಿಮಾವ

ನಾಕಂಬು ತಿಂಗಳಿಗೆ ನಾಕೇನ ಬಯಸ್ಯಾಳ।
ಕಾಕೀಯ ಹಣ್ಣು ಕೈತುಂಬಾ

ಐದಂಬು ತಿಂಗಳಿಗಿ ಐದೇನ ಬಯಸ್ಯಾಳ।
ಕೊಯ್ದು ಮಲ್ಲೀಗಿ ನನಿದಂಡಿ

ಆರೆಂಬು ತಿಂಗಳಿಗಿ ಆರೇನ ಬಯಸ್ಯಾಳ।
ಆರಾಕಿದ ಬಾನ ಕೆನಿ-ಮಸರ

ಏಳಂಬು ತಿಂಗಳಿಗಿ ಏಳೇನ ಬಯಸ್ಯಾಳ।
ಹೇಳಿ ಕಳುವ್ಯಾಳ ತವರಿಗಿ

ಎಂಟಂಬು ತಿಂಗಳಿಗಿ ಎಂಟೇನ ಬಯಸ್ಯಾಳ।
ಕಂಟಲ್ಯಾಲಕ್ಕಿ ಕೊಡ ತುಪ್ಪ

ಒಂಬತ್ತು ತಿಂಗಳಿಗಿ ತುಂಬ್ಯಾವ ನವಮಾಸ।
ಸಂದು ಸಂದೆಲ್ಲ ಕಿರಿಬ್ಯಾನಿ

ವಾಳ್ಯವ್ಯಾಳ್ಯಕ್ಕೆ ಬ್ಯಾನಿ ತಾಳ ಬಾರಿಸಿದಂಗ।
ತಾಳಲಾರೆನೆ ನಿಲ್ಲಲಾರೆನವ್ವಾ। ತಾಯವ್ವನಿರಬೇಕು ಜನ್ಮಕ

ಹೊತ್ತು ಹೊತ್ತಿಲೆ ಬ್ಯಾನಿ ಕತ್ತೀಲೆ ಕಡ್ಡಂತೆ।
ಹೆತ್ತವ್ವನಿರಬೇಕ ಜನ್ಮಕ

ಹತ್ತಂಬು ತಿಂಗಳಿಗಿ ಹೆತ್ತಾಳ ಹಸಗೂಸ।
ಸುತ್ತೆಲ್ಲ ನೆರದಾರ ಸುಮಂಗಲೇರು

## ನೂಲೊಲ್ಯಾಕ ಚೆನ್ನೀ ?

ಗಂಡ - ನೂಲೊಲ್ಯಾಕ ಚೆನ್ನೀ ।
ನೂಲೋಲ್ಯಾಕ ಚೆನ್ನೀ ।

ಹೆಂಡತಿ - ರಾಟಿಯಿಲ್ಲೋ ಜಾಣಾ ।
ರಾಟಿಯಿಲ್ಲೋ ಜಾಣಾ ।

ಕತೆಗಾರ - ಮನಿಯಾನ ಬಂಡೀ ಮುರ
ಮನಿಯಾನ ಬಂಡೀ ಮುರಸಿ
ರಾಟೀ ಮಾಡಿಸಿ ಕೊಟ್ಟಾ
ರಾಟೀ ಮಾಡಿಸಿ ಕೊಟ್ಟಾ

ಗಂಡ - ನೂಲೊಲ್ಯಾಕ ಚೆನ್ನಿ ।
ನೂಲೋಲ್ಯಾಕ ಚೆನ್ನಿ ।

ಹೆಂಡತಿ - ಕದರಿಲ್ಲೊ ಜಾಣಾ ।
ಕದರಿಲ್ಲೊ ಜಾಣಾ ।

ಕತೆಗಾರ - ಕೈಯನ ಗುದ್ದಲಿ ಮುರಿಸಿ
ಕೈಯನ ಗುದ್ದಲಿ ಮುರಿಸಿ
ಕದರ ಮಾಡಿಸಿಕೊಟ್ಟಾ
ಕದರ ಮಾಡಿಸಿಕೊಟ್ಟಾ ।

ಗಂಡ - ನೂಲೊಲ್ಯಾಕ ಚೆನ್ನಿ ।
ನೂಲೋಲ್ಯಾಕ ಚೆನ್ನಿ ।

ಹೆಂಡತಿ - ಚಿಲ್ಲಿಲ್ಲೊ ಜಾಣಾ ।
ಚಿಲ್ಲಿಲ್ಲೊ ಜಾಣಾ ।

ಕತೆಗಾರ - ಮನಿಯಾನ ಕೋಣವ ಕಡಿಸಿ
ಮನಿಯಾನ ಕೋಣವ ಕಡಿಸಿ
ಚಿಲ್ಲು ಮಾಡಿಸಿಕೊಟ್ಟಾ
ಚಿಲ್ಲು ಮಾಡಿಸಿಕೊಟ್ಟಾ

ಗಂಡ - ನೂಲೊಲ್ಯಾಕ ಚೆನ್ನಿ ।
ನೂಲೋಲ್ಯಾಕ ಚೆನ್ನಿ ।

ಹೆಂಡತಿ - ಹಮ್ಮಿಗಿಲ್ಲಲೊ ಜಾಣಾ ।
ಹಮ್ಮಿಗಿಲ್ಲಲೊ ಜಾಣಾ ।

ಕತೆಗಾರ - ನಡುವಿನ ಉಡದಾರ ಕಡಿದು
ನಡುವಿನ ಉಡದಾರ ಕಡಿದು
ಹಮ್ಮಿಗಿ ಮಾಡಿಸಿಕೊಟ್ಟಾ
ಹಮ್ಮಿಗಿ ಮಾಡಿಸಿಕೊಟ್ಟಾ

ಗಂಡ - ನೂಲೊಲ್ಯಾಕ ಚೆನ್ನಿ ।
ನೂಲೋಲ್ಯಾಕ ಚೆನ್ನಿ ।

ಹೆಂಡತಿ - ಕಟ್ಟಿ ಇಲ್ಲಲೊ ಜಾಣಾ
ಕಟ್ಟಿ ಇಲ್ಲಲೊ ಜಾಣಾ

ಕತೆಗಾರ - ಊರನ ವಡ್ಡರ ಕರಿಸಿ
ಊರನ ವಡ್ಡರ ಕರಿಸಿ
ಕಟ್ಟಿ ಕಟ್ಟಿಸಿಕೊಟ್ಟಾ
ಕಟ್ಟಿ ಕಟ್ಟಿಸಿಕೊಟ್ಟಾ

ಗಂಡ - ನೂಲೊಲ್ಯಾಕ ಚೆನ್ನಿ ।
ನೂಲೋಲ್ಯಾಕ ಚೆನ್ನಿ ।

ಹೆಂಡತಿ - ಗೆಳತ್ಯಾರಿಲ್ಲೊ ಜಾಣ ।
ಗೆಳತ್ಯಾರಿಲ್ಲೊ ಜಾಣ ।

ಕತೆಗಾರ - ಓಣ್ಯಾಗಿನವರ ಕರಿಸಿ
ಓಣ್ಯಾಗಿನವರ ಕರಿಸಿ
ಗೆಳತ್ಯಾರ ಕೂಡಿಸಿಕೊಟ್ಟಾ
ಗೆಳತ್ಯಾರ ಕೂಡಿಸಿಕೊಟ್ಟಾ

ಗಂಡ - ನೂಲೊಲ್ಯಾಕ ಚೆನ್ನೀ ।
ನೂಲೋಲ್ಯಾಕ ಚೆನ್ನೀ ।

ಹೆಂಡತಿ - ಗುಗ್ಗರಿಲ್ಲೊ ಜಾಣ ।
ಗುಗ್ಗರಿಲ್ಲೊ ಜಾಣ ।

ಕತೆಗಾರ - ಗೋದಿ ಕಡ್ಲಿ ತರಿಸಿ
ಗೋದಿ ಕಡ್ಲಿ ತರಿಸಿ
ಗುಗ್ಗುರಿ ಹಾಕಿಸಿಕೊಟ್ಟ್ಯಾ
ಗುಗ್ಗುರಿ ಹಾಕಿಸಿಕೊಟ್ಟ್ಯಾ

ಗಂಡ - ನೂಲೊಲ್ಯಾಕ ಚೆನ್ನೀ ।
ನೂಲೋಲ್ಯಾಕ ಚೆನ್ನೀ ।

ಹೆಂಡತಿ - ನನಗೆ ಬರೋದಿಲ್ಲೋ ಜಾಣ ।
ನನಗೆ ಬರೋದಿಲ್ಲೋ ಜಾಣ ।

## ಸಂಭಾಷಣಾ ರೂಪದ ಒಂದು ಹಾಡು

ಕೆಟ್ಟೆ ಕೆಟ್ಟೆ ಮರುಳ ಪುರುಷ

ಯಿಟ್ಟು ಮಾಡಿ ಸೊಪ್ಪು ಮಾಡಿ
ಎಲೆ ನಾರಿ ಇಕ್ಕುದಲೆ ಎಲ್ಲಿಗೋಗ್ದೆ

ಕೆಟ್ಟೆ ಕೆಟ್ಟೆ ಮರುಳ ಪುರುಷ
ಕೆರೆವೊಳಗೆ ಬಳ್ಳಿ ಸೊಪ್ಪು ಕುಯ್ಯುತ್ತಿದ್ದೆ

ಬಳ್ಳಿ ಸೊಪ್ಪು ಕುಯ್ಯುವಾಗ
ಎಲೆನಾರಿ ಬೆಳ್ಳಗಿದ್ದನವುನ್ಯಾರೆ ?

ಕೆಟ್ಟೆ ಕೆಟ್ಟೆ ಮರುಳ ಪುರುಷ
ಕೆರೆವೊಳಗೆ ಬೆಳ್ಳಕ್ಕಿ ಇರಬಾರದೆ !

ಎಣ್ಣಿಲ್ಲ ಬೆಣ್ಣಿಲ್ಲ
ಎಲೆ ನಾರಿ ತಲೆಯಂಗೆ ಎಣ್ಣಾತೆ ?

ಕೆಟ್ಟೆ ಕೆಟ್ಟೆ ಎಲೆ ಪುರುಷ
ಗಾಣಿಗರ ಶಿಷುವ ಮುದ್ದಾಡಿ ಬಂದೆ

ಅಡಿಕಿಲ್ಲ ಎಲಿಯಿಲ್ಲ
ಎಲೆ ನಾರಿ ಬಾಯೆಂಗೆ ಕೆಂಪುಗಾತೆ ?

ಕೆಟ್ಟೆ ಕೆಟ್ಟೆ ಎಲೆ ಪುರುಷ
ತ್ಯಾಟದಾಗ್ರ ಮೆದ್ದು ಬಂದೆ

ದನವಿಲ್ಲ ಕರುವಿಲ್ಲ
ಎಲೆ ನಾರಿ ಸೀರೆಂಗೆ ಸಗುಣಾತೆ ?

ಕೆಟ್ಟೆ ಕೆಟ್ಟೆ ಮರುಳ ಪುರುಷ
ಬಣಜಿಗರ ಕರುವ ಮುದ್ದಾಡಿ ಬಂದೆ

ದುಡ್ಡಿಲ್ಲ ಕಾಸಿಲ್ಲ
ಎಲೆ ನಾರಿ ಬಳಿಯೆಂಗೆ ಬಂದುವೆ ?

ಕೆಟ್ಟೆ ಕೆಟ್ಟೆ ಎಲೆ ಪುರುಷ
ಊರೊಳಗೆ ಬಳಿಗಾರ ಬರುಬಾರುದೆ

## ಮಕ್ಕಳಾಟದ ಹಾಡುಗಳು

ಜೀರ್ ಬಾರ್ ಮಲ್ಲಿ
ಮಜ್ಗೆ ಕಡಿಯೆ ಮಲ್ಲಿ
ಇಷ್ಟ್‌ದಪ್ಪ ಬೆಣ್ಣೆ ಬಂತು ಇಷ್ಟ್‌ದಪ್ಪ ಬೆಣ್ಣೆ ಬಂತು
ಈಷ್ಟ್‌ದಪ್ಪ ಬೆಣ್ಣೆ ಬಂತೂ

ಸಾರ್ಸಿ ಗೂಡ್ಸಿ
ರಂಗೋಲಿ ಇಟ್ಟು ಕೆಮ್ಮಣ್ಣಚ್ಚಿ
ಬಾಳೆಲೆ ಹಾಕಿ
ಅನ್ನ, ಸಾರು, ಹೋಳಿೂ, ಪಾಯ್ಸ, ತುಪ್ಪ ಎಲ್ಲಾ ಹಾಕಿ
ನಂಗೊಂತುತ್ತು, ನಿಂಗೊಂತುತ್ತು, ಅತ್ತೆಗೊಂದು ತುತ್ತು
ಅಮ್ಮಂಗೊಂತುತ್ತು ... ಕೊಟ್ಟು
ಮಿಕ್ಕಿದೆಲ್ಲ ನಾಯಿ ಮಕಕ್ಕ ಬಳ್ದು
ಕಳ್ಳ ಬಂದ ಕಟ್ಟೆಕದ್ದ, ಕಚಂಗುಳಿ ಕೊಟ್ಟ

ಆನೆ ಬಂತೊಂದಾನೆ
ಯಾವೂರಾನೆ ?
ಸಿದ್ದಾಪುರದಾನೆ
ಇಲ್ಲಿಗ್ಯಾಕೆ ಬಂತು ?
ಹಾದಿ ತಪ್ಪಿ ಬಂತು
ಬೀದಿ ತಪ್ಪಿ ಬಂತು
ಎಳ್ನೀರ್ ಕುಡ್ಸಕ್ಕ್ ಬಂತು

ಅಚ್ಚಚ್ಚು ಬೆಲ್ಲದಚ್ಚು
ಅತ್ತೇ ಮನೆಯ ಕಲಗಚ್ಚು
ಅಲ್ಲಿ ನೋಡು ಇಲ್ಲಿ ನೋಡು
ಸಂಪಂಗಿ ಮರದಲಿ ಗುಂಪು ನೋಡು
ಯಾವ ಗುಂಪು ಕಾಗೆ ಗುಂಪು
ಯಾವ ಕಾಗೆ ಕಪ್ಪು ಕಾಗೆ
ಯಾವ ಕಪ್ಪು ಹಸಿವಿನ ಕಪ್ಪು
ಯಾವ ಹಸು ಗೋಕುಲದ ಹಸು
ಯಾವ ಗೋಕುಲ ನಂದಗೋಕುಲ

ತಟ್ಕೆ ಮುಟ್ಕೆ ತಾಳಂ ದೇವಿ
ಇಪ್ಪತ್ತೊಂದು ಅವ್ರೆಕಾಳು
ಆಚೆ ಬೀದಿಗ್ಹೋಗಿ
ಅಡ್ನರಾಗಿ ತಂದು
ಡರ್‍ರಂ ಬರ್‍ರಂ ಬೀಸಿ
ಮೂರು ರೊಟ್ಟಿ ತಟ್ಟಿ
ಅತ್ತೆಗೊಂದು ಕೊಟ್ಟು
ಮಾವಂಗೊಂದು ಕೊಟ್ಟು
ತಾನೊಂದ್ ತಿಂದು
ಮನೇ ಗಂಡಬಂದರೆ
ಕಾಲಿ ಹೆಂಡು ಮುಂದಿಟ್ಟು
ಹೊಡೀ ಬೇಡ ಗಂಡ
ಬಡೀ ಬೇಡ ಗಂಡ
ನಿಂಗಿಕ್ಕಿದ್ದೆಲ್ಲ ದಂಡ
ಹುಚ್ಚು ಮುಂಡೆ ಗಂಡ

ಹಾಲಿಗೊಂದು ಕಾಸು
ಮೊಸರಿಗೊಂದು ಕಾಸು
ಬೆಣ್ಣೆಗೊಂದು ಕಾಸು
ತುಪ್ಪಕೊಂದು ಕಾಸು
ಚಿಕ್ಕಪ್ಪ ಕೊಟ್ಟ ಕಾಸು ಪುಕ್ಕಟ್ಟೆ ಹೋಯ್ತು
ದೊಡ್ಡಪ್ಪ ಕೊಟ್ಟಕಾಸು ದೊಡ್ಡದಾಯ್ತು
ಭಾವಯ್ಯ ಕೊಟ್ಟ ಕಾಸು ಭಾವೀಲಿ ಬಿತ್ತು
ಮಾವಯ್ಯ ಕೊಟ್ಟ ಕಾಸು ಮಾಯವಾಯ್ತು

★★★



AKSHARA GRANTHALAYA
ACC.NO. 015542

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು